ಲಿಖಿತ ಮೂಲಕ ಉತ್ತರಿಸುವ
ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಸೋಮವಾರ, ದಿನಾಂಕ : 01 ನೇ ಫೆಬ್ರುವರಿ, 2021

ವಾಣಿಜ್ಯ ಶಾಸ್ತ್ರ ಬೋಧನೆ ಬಗ್ಗೆ

ಡಾ|| ವೈ.ಎ. ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) :-

148 (175) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಸರ್ಕಾರಿ ಪದವಿಪೂರ್ವ ಕಾಲೇಜುಗಳಲ್ಲಿ ಪದವಿಪೂರ್ವ ಶಿಕ್ಷಣ ಇಲಾಖೆಯಿಂದ ವಾಣಿಜ್ಯ ಶಾಸ್ತ್ರ ಸಂಯೋಜನೆಯನ್ನು ಮಂಜೂರು ಮಾಡಿ, ಈ ಸಂಯೋಜನೆಗೆ ಬೋಧನೆ ಮಾಡುವ ವಾಣಿಜ್ಯ ಶಾಸ್ತ್ರ ಉಪನ್ಯಾಸಕರ ಹುದ್ದೆ ಮಂಜೂರು ಮಾಡಲಾಗಿದೆಯೇ;

(ಆ) ವಾಣಿಜ್ಯ ಶಾಸ್ತ್ರ ಹುದ್ದೆ ಮಂಜೂರು ಮಾಡದೇ ಇದ್ದಲ್ಲಿ, ವಾಣಿಜ್ಯ ಶಾಸ್ತ್ರ ಪಠ್ಯವನ್ನು ಬೋಧಿಸುವ ವ್ಯವಸ್ಥೆಯನ್ನು ಪದವಿಪೂರ್ವ ಶಿಕ್ಷಣ ಇಲಾಖೆಯು ಮಾಡಿದೆಯೇ;

(ಇ) ವಾಣಿಜ್ಯ ಶಾಸ್ತ್ರ ಹುದ್ದೆಗಳು ಮಂಜೂರು ಮಾಡದೇ ಬೋಧನೆ ಮಾಡಲು ಅತಿಥಿ ಉಪನ್ಯಾಸಕರ ನೇಮಕಾತಿಗೆ ಸರ್ಕಾರ ಚಿಂತನೆ ನಡೆಸಿದೆಯೇ ? (ಮಾಹಿತಿ ನೀಡುವುದು)